ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ಪದವಿ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಖಾಯಂ ಹಾಗೂ ಅತಿಥಿ ಉಪನ್ಯಾಸಕರ ಬಗ್ಗೆ

ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ):-

494 (506) ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಎಷ್ಟು ಪದವಿ ಕಾಲೇಜುಗಳಿವೆ; ಅವುಗಳಲ್ಲಿ ಪ್ರತಿಯೊಂದು ಕಾಲೇಜುಗಳಲ್ಲೂ ಕರ್ತವ್ಯ ನಿರ್ವಹಿಸುತ್ತಿರುವ ಖಾಯಂ ಹಾಗೂ ಅತಿಥಿ ಉಪನ್ಯಾಸಕರ ಸಂಖ್ಯೆ ಎಷ್ಟು; (ವಿವರ ನೀಡುವುದು)

(ಆ) ಅತಿಥಿ ಉಪನ್ಯಾಸಕರು ಎಲ್ಲಾ ವಿದ್ಯಾರ್ಹತೆ ಹೊಂದಿದ್ದರು ಸಹ ಖಾಲಿಯಿರುವ ಹುದ್ದೆಗಳಿಗೆ ಅವರನ್ನು ಖಾಯಂಗೊಳಿಸಲು ಸರ್ಕಾರಕ್ಕೆ ಇರುವ ಸಮಸ್ಯೆಗಳೇನು;

(ಇ) ಇವರುಗಳು ವಯೋಮಿತಿಯನ್ನು ದಾಟುತ್ತಿದ್ದು, ಅಭದ್ರತೆಯಿಂದಾಗಿ ಮಾನಸಿಕ ತೊಳಲಾಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಅವರಿಗೆ ಸೇವಾ ಭದ್ರತೆಯನ್ನು ನೀಡಲಾಗುವುದೇ;

(ಈ) ಅತಿಥಿ ಉಪನ್ಯಾಸಕರನ್ನೂ ಖಾಯಂಗೊಳಿಸುವುದಾಗಿ ಸರ್ಕಾರವು ಭರವಸೆ ನೀಡಿದೆಯೇ; ನೀಡಿದ್ದಲ್ಲಿ, ಯಾವಾಗ ಖಾಯಂ ಗೊಳಿಸಲಾಗುವುದು?